# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2064(2457) |
| ಮಾನ್ಯ ಸದಸ್ಯರ ಹೆಸರು | : | ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 30-03-2021 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಮತ್ತು ಸಕ್ಕರೆ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೀದರ್ ಜಿಲ್ಲೆಯ ಸಂಸ್ಕರಣಾ ಘಟಕದಲ್ಲಿ ನಗರಸಭೆ ಸೇರಿದಂತೆ ಜಿಲ್ಲೆಯ ಯಾವುದೇ ಸ್ಥಳೀಯ ಸಂಸ್ಥೆಗಳಲ್ಲೂ ತ್ಯಾಜ್ಯ ಸಂಸ್ಕರಣೆ ನಿಯಮ ಪಾಲನೆಯಾಗದಿರುವುದು ನಿಜವೇ: | ಬೀದರ್ ನಗರಸಭೆ ಸೇರಿದಂತೆ ಜಿಲ್ಲೆಯ ಎಲ್ಲಾ ನಗರ ಸ್ಥಳೀಯ ಸಂಸ್ಥೆಗಳಲ್ಲಿ ಘನತ್ಯಾಜ್ಯ ವಸ್ತು ನಿರ್ವಹಣೆ ನಿಯಮಗಳು, 2016 ರಂತೆ ಘನತ್ಯಾಜ್ಯ ವಸ್ತುವನ್ನು ಸಂಸ್ಕರಣೆ ಮಾಡಿ ವಿಲೇ ಮಾಡಲು ನಿರ್ದಿಷ್ಟವಾದ ಜಾಗಗಳನ್ನು ಹೊಂದಿರುತ್ತವೆ.<br><br>ಹಸಿಕಸವನ್ನು ಏರೋಬಿಕ್ ಕಾಂಪೋಸ್ಟ್, ವರ್ಮಿ ಕಾಂಪೋಸ್ಟ್ ವಿಧಾನಗಳ ಮೂಲಕ ಗೊಬ್ಬರವಾಗಿ ಪರಿವರ್ತಿಸಲು ಕ್ರಮ ವಹಿಸಲಾಗಿರುತ್ತದೆ. ಒಣ ಕಸವನ್ನು ಮರುಬಳಕೆ/ಆರ್.ಡಿ.ಎಫ್ ಮೂಲಕ ಸಂಸ್ಕರಿಸಲು ನಿಯಮಾನುಸಾರ ಕ್ರಮ ಕೈಗೊಳ್ಳಲಾಗುತ್ತಿದೆ.<br><br>ಜಿಲ್ಲೆಯ ನಗರ ಸ್ಥಳೀಯ ಸಂಸ್ಥೆಗಳಲ್ಲಿನ ಘನ ತ್ಯಾಜ್ಯ ವಸ್ತು ನಿರ್ವಹಣೆ ಯೋಜನೆಯ ಅನುಷ್ಟಾನದ ಬಗ್ಗೆ ಮಾಹಿತಿಯನ್ನು ಅನುಬಂಧ-1 ರಲ್ಲಿ ಲಗತ್ತಿಸಿದೆ.<br><br>ಶೇ. 100ರಷ್ಟು ತ್ಯಾಜ್ಯ ಸಂಸ್ಕರಣೆಗಾಗಿ ಅಗತ್ಯ ಸೌಲಭ್ಯಗಳನ್ನು ಅಭಿವೃದ್ಧಿ ಪಡಿಸುವ ಸಲುವಾಗಿ ಹಳ್ಳಿಖೇಡ ಪಟ್ಟಣ ಪಂಚಾಯತಿ ಹೊರತುಪಡಿಸಿ ಉಳಿಕೆ 6 ಪಟ್ಟಣಗಳ SWM DPR ಗಳಿಗೆ ಸರ್ಕಾರದಿಂದ ಅನುಮೋದನೆ ಪಡೆಯಲಾಗಿದ್ದು ಟೆಂಡರ್ ಪ್ರಕ್ರಿಯೆಯು ಚಾಲ್ತಿಯಲ್ಲಿರುತ್ತದೆ. |
| ಆ | ಜಿಲ್ಲೆಯ ನಗರಸಭೆ ವ್ಯಾಪ್ತಿಯಲ್ಲಿ ಪ್ರತಿನಿತ್ಯ ಸಂಗ್ರಹವಾಗುತ್ತಿರುವ ಘನತ್ಯಾಜ್ಯ ಎಷ್ಟು ಹಾಗೂ ಅದನ್ನು ವೈಜ್ಞಾನಿಕ ರೀತಿಯಲ್ಲಿ ಪುನರ್ ಬಳಕೆ ಮಾಡುವ ಮತ್ತು ವಿಲೇವಾರಿ ಮಾಡುವ ಯೋಜನೆ ಇದೆಯೇ; (ವಿವರ ನೀಡುವುದು) | **ಬೀದರ್ ನಗರಸಭೆ**<br>ಬೀದರ್ ನಗರಸಭೆ ವ್ಯಾಪ್ತಿಯಲ್ಲಿ ಪ್ರತಿ ನಿತ್ಯ ಉತ್ಪತ್ತಿಯಾಗುತ್ತಿರುವ 91 ಟನ್ ತ್ಯಾಜ್ಯದ ಪೈಕಿ, ಅಂದಾಜು 40 ಟನ್ ತ್ಯಾಜ್ಯವನ್ನು ಸಂಸ್ಕರಣೆ ಮಾಡಲಾಗುತ್ತಿದ್ದು, ಸಿಟಿ ಕಾಂಪೋಸ್ಟ್‌ನ್ನು ನಗರಸಭೆ ಉದ್ಯಾನವನಗಳಲ್ಲಿ ಬಳಸಲು ಹಾಗೂ ಖಾಸಗಿಯವರಿಗೆ ಮಾರಾಟ ಮಾಡಲು ಕ್ರಮ ವಹಿಸಲಾಗಿರುತ್ತದೆ.<br><br>ಒಣ ಕಸವನ್ನು ಬೇರ್ಪಡಿಸಿ ಬೇಲಿಂಗ್ ಯಂತ್ರ ಮೂಲಕ ಸಂಸ್ಕರಣೆ ಮಾಡಿ ಪ್ಲಾಸ್ಟಿಕ್/ಒಣ ಕಸವನ್ನು ಎ.ಸಿ.ಸಿ ಸಿಮೆಂಟ್, ವಾಡಿ ಕಂಪೆನಿಯವರಿಗೆ ಒಪ್ಪಂದದಂತೆ ರವಾನಿಸಲಾಗುತ್ತಿದೆ. ಇಲ್ಲಿಯವರೆಗೆ ಸುಮಾರು 51 ಟನ್‌ಗಳಷ್ಟು ಪ್ಲಾಸ್ಟಿಕ್ ತ್ಯಾಜ್ಯವನ್ನು ಸಿಮೆಂಟ್ ಕಾರ್ಖಾನೆಗೆ ಸಾಗಿಸಲಾಗಿದೆ. |

| | | |
|---|---|---|
| | | **ಬಸವಕಲ್ಯಾಣ ನಗರಸಭೆ**<br>ಬಸವಕಲ್ಯಾಣ ನಗರಸಭೆಯ ವ್ಯಾಪ್ತಿಯಲ್ಲಿ ಪ್ರತಿ ನಿತ್ಯ ಉತ್ಪತ್ತಿಯಾಗುತ್ತಿರುವ 28 ಟನ್ ತ್ಯಾಜ್ಯದ ಪೈಕಿ, ಅಂದಾಜು 19 ಟನ್ ತ್ಯಾಜ್ಯವನ್ನು ಸಂಸ್ಕರಣೆ ಮಾಡಲಾಗುತ್ತಿದೆ. ನಗರಸಭೆಯಲ್ಲಿ ಪ್ರತಿದಿನ 2 ಟನ್ ಒಣ ತ್ಯಾಜ್ಯವನ್ನು ಆರ್.ಡಿ.ಎಫ್ ಆಗಿ ಪರಿವರ್ತಿಸಲಾಗುತ್ತಿದ್ದು, ಸಿಮೆಂಟ್ ಕಾರ್ಖಾನೆಗೆ ಸಾಗಿಸಲು ಕ್ರಮವಹಿಸಲಾಗುತ್ತಿದೆ. |
| ಇ | ಈ ರೀತಿ ಸಂಗ್ರಹವಾದ ತ್ಯಾಜ್ಯವನ್ನು ಭೂಮಿಗೆ ಹಾಕಬಾರದೆಂದು 2005 ರಲ್ಲಿ ನಿಯಮ ರೂಪಿಸಿದ್ದರೂ ಇದನ್ನು ಲೆಕ್ಕಿಸದೆ ಕಸವನ್ನು ಗುಂಡಿಗೆ ಹಾಕುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇದನ್ನು ನಿಲ್ಲಿಸಲು ಸರ್ಕಾರ ಕೈಗೊಂಡಿರುವ ಕ್ರಮ ಏನು; | SWM Rules 2016, 15(zi) ರಲ್ಲಿ ನಿಸ್ಸತ್ವ ಹಾಗೂ ನಿರುಪಯುಕ್ತ ತ್ಯಾಜ್ಯವನ್ನು ನಿಯಮಾನುಸಾರ ಅಭಿವೃದ್ಧಿ ಪಡಿಸಿರುವ Sanitary Landfill ಸೌಲಭ್ಯಗಳಲ್ಲಿ ಭರ್ತಿ ಮಾಡಲು ಅವಕಾಶವಿದ್ದು, ಅದರಂತೆ ಕ್ರಮವಹಿಸಲಾಗುತ್ತಿದೆ.<br>15 (zi): non-usable, non-recyclable, non-biodegradable, non-combustible and non-reactive inert waste and pre-processing rejects and residues from waste processing facilities to go to sanitary landfill and the sanitary landfill sites shall meet the specifications as given in Schedule–I' |
| ಈ | ಜಿಲ್ಲೆಯ ನಗರಸಭೆ ಮತ್ತು ಪುರಸಭೆಗಳು, ನಗರ ಸ್ಥಳೀಯ ಸಂಸ್ಥೆಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ತ್ಯಾಜ್ಯ ಸಂಗ್ರಹಣೆಯಾಗುತ್ತಿದ್ದು ಇದರ ವಿಲೇವಾರಿ ಮತ್ತು ಪುನರ್ ಬಳಕೆಗೆ ಸರ್ಕಾರ ಕೈಗೊಂಡಿರುವ ಕ್ರಮವೇನು? | ಜಿಲ್ಲೆಯ ನಗರಸಭೆ ಮತ್ತು ಪುರಸಭೆಗಳಲ್ಲಿ SWM Rules 2016 ರಂತೆ ಹಾಲಿ ಲಭ್ಯವಿರುವ ಸೌಲಭ್ಯಗಳಲ್ಲಿ ಶೇ.35 ರಷ್ಟು ತ್ಯಾಜ್ಯ ಸಂಸ್ಕರಣೆ ಮಾಡಲಾಗುತ್ತಿದ್ದು, ಪುನರ್ಬಳಕೆ ತ್ಯಾಜ್ಯವನ್ನು ಒಣ ತ್ಯಾಜ್ಯ ನಿರ್ವಹಣಾ ಕೇಂದ್ರಗಳಲ್ಲಿ ನಿರ್ವಹಿಸಿ, ಪುನರ್‌ಬಳಕೆಗೆ ಯೋಗ್ಯವಲ್ಲದ ವಸ್ತುಗಳನ್ನು ACC ಸಿಮೆಂಟ್ ಕಾರ್ಖಾನೆಗೆ ಸಹ-ದಹಿಸುವಿಕೆಗೆ ರವಾನಿಸಲಾಗುತ್ತಿದೆ. |

ಸಂಖ್ಯೆ: ನಅಇ 80 ಸಿಎಸ್‌ಎಸ್ 2021

[ಎನ್. ನಾಗರಾಜ್ (ಎಂ.ಟಿ.ಬಿ.)]
ಪೌರಾಡಳಿತ ಹಾಗೂ ಸಕ್ಕರೆ ಸಚಿವರು.

ಮಾನ್ಯ ವಿಧಾನಪರಿಷತ್ತಿನ ಸದಸ್ಯರಾದ ಶ್ರೀ ಅರವಿಂದ ಕುಮಾರ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು) ರವರ ಚುಕ್ಕೆ ಗುರುತಿಲ್ಲದ ಪ್ರ.ಸಂ: 2457 ಕ್ಕೆ ಉತ್ತರ

ಅನುಬಂಧ-1

| ಕ್ರ..ಸಂ | ನಗರಸ್ಥಳೀಯ ಸಂಸ್ಥೆಯ ಹೆಸರು | ಒಟ್ಟು ವಾರ್ಡುಗಳ ಸಂಖ್ಯೆ | ಪ್ರತಿದಿನ ಉತ್ಪತ್ತಿಯಾಗುವ ತ್ಯಾಜ್ಯದ ಪ್ರಮಾಣ (ಟಿಪಿಡಿ) | ಮನೆ-ಮನೆ ಯಿಂದ ಕಸ ಸಂಗ್ರಹಣೆ-ಯಾಗುತ್ತಿರುವ ವಾರ್ಡುಗಳ ಸಂಖ್ಯೆ | ಶೇ. 100 ರಷ್ಟು ಮೂಲದಲ್ಲಿಯೇ ಬೇರ್ಪಡಿಸಿ ಸಂಗ್ರಹಿಸಲಾಗುತ್ತಿರುವ ವಾರ್ಡುಗಳ ಸಂಖ್ಯೆ | ಸಂಗ್ರಹಿಸಲಾದ ತ್ಯಾಜ್ಯದ ಪ್ರಮಾಣ (ಟಿಪಿಡಿ) | ಸಂಸ್ಕರಣೆ ಮಾಡುತ್ತಿರುವ ತ್ಯಾಜ್ಯದ ಪ್ರಮಾಣ (ಟಿಪಿಡಿ) |
|---|---|---|---|---|---|---|---|
| 1 | ನಗರಸಭೆ ಬೀದರ | 35 | 94.22 | 35 | 26 | 91.00 | 40.00 |
| 2 | ನಗರಸಭೆ ಬಸವಕಲ್ಯಾಣ | 31 | 28 | 31 | 31 | 22.00 | 19.00 |
| 3 | ಪುರಸಭೆ ಭಾಲ್ಕಿ | 27 | 17 | 27 | 27 | 14.25 | 3.00 |
| 4 | ಪುರಸಭೆ ಹುಮನಾಬಾದ | 27 | 17 | 27 | 25 | 16.00 | 11.50 |
| 5 | ಪುರಸಭೆ ಚಿಟಗುಪ್ಪಾ | 23 | 11 | 23 | 18 | 10.50 | 8.50 |
| 6 | ಪುರಸಭೆ ಹಳ್ಳಿಖೇಡ ಬಿ | 23 | 10.2 | 23 | 15 | 6.40 | 2.00 |
| 7 | ಪಟ್ಟಣ ಪಂಚಾಯತಿ ಔರಾದ ಬಿ | 20 | 8.54 | 20 | 19 | 7.25 | 2.00 |
| ಒಟ್ಟು | | 186 | 185.96 | 186 | 161 | 167.4 | 86.00 |